ಎಂದರ್ಥವು. ಇಲಾ ಎಂದರೆ ಭೂಮಿಯು. ಯಜ್ಞದಲ್ಲಿ ಘೃತ, ಸೋಮ ಮೊದಲಾದವುಗಳನ್ನು ಯಥೇಚ್ಛವಾಗಿ ಉಪಯೋಗಿಸುವುದರಿಂದ ಅಲ್ಲಿರುವ ಭೂಮಿಯು ಆಗಾಗ ಚೆಲ್ಲಿಹೋಗುವ ಆ ರಸಗಳಿಂದ ನೆನೆದುಹೋಗುವುದು ಸ್ವಾಭಾವಿಕವಾಗಿದೆ. ಆದ್ದರಿಂದ ಅಂತಹ ಸಿಕ್ತಪ್ರದೇಶವು ಎಂದರೆ ಯಜ್ಞಭೂಮಿಯು ಎಂದು ತಿಲ್ವಿಲ ಶಬ್ದಕ್ಕೆ ಅರ್ಥವಿವರಣೆ ಮಾಡಿದಾರೆ.



॥ ಸಂಹಿತಾಪಾಠಃ ॥

**ಹಿರಣ್ಯರೂಪಮುಷಸೋ ವ್ಯುಷ್ಟಾವಯಃ ಸ್ಥೂಣಮುದಿತಾ ಸೂರ್ಯಸ್ಯ ।**
**ಆ ರೋಹಥೋ ವರುಣ ಮಿತ್ರ ಗರ್ತಮತಶ್ಚಕ್ಷಾಥೇ ಅದಿತಿಂ ದಿತಿಂ ಚ ॥೮॥**

॥ ಪದಪಾಠಃ ॥

ಹಿರಣ್ಯऽರೂಪಂ । ಉಷಸಃ । ವಿऽಉಷ್ಟೌ । ಅಯಃऽಸ್ಥೂಣಂ । ಉತ್ऽಇತಾ । ಸೂರ್ಯಸ್ಯ ।
ಆ । ರೋಹಥಃ । ವರುಣ । ಮಿತ್ರ । ಗರ್ತಂ । ಅತಃ । ಚಕ್ಷಾಥೇ ಇತಿ । ಅದಿತಿಂ । ದಿತಿಂ । ಚ ॥ ೮ ॥

॥ ಸಾಯಣಭಾಷ್ಯಂ ॥

ಉಷಸೋ ವ್ಯುಷ್ಟೌ । ಪ್ರಾತಃಕಾಲ ಇತ್ಯರ್ಥಃ । ಸೂರ್ಯಸ್ಯೋದಿತೋದಿತಾವುದಯೇ । ಸ ಏವ ಕಾಲಃ ಪ್ರಕಾರಾಂತರೇಣೋಕ್ತಃ । ತಸ್ಮಿನ್ ಕಾಲೇ ಹಿರಣ್ಯರೂಪಮಯಃಸ್ಥೂಣಮಯೋಮಯಶಂಕುಂ ಗರ್ತಂ ರಥಂ ಹೇ ವರುಣ ಹೇ ಮಿತ್ರ ಯುವಾಂ ಗರ್ತಮಾ ರೋಹಥೋ ಯಜ್ಞಂ ಪ್ರಾಪ್ತುಂ । ಅತೋಽಸ್ಮಾದ್ಧೇತೋರದಿತಿಮಖಂಡನೀಯಾಂ ಭೂಮಿಂ ದಿತಿಂ ಖಂಡಿತಾಂ ಪ್ರಜಾದಿಕಾಂ ಚ ಚಕ್ಷಾಥೇ । ಪಶ್ಯಥಃ ।

॥ ಪ್ರತಿಪದಾರ್ಥ ॥

ವರುಣ, ಮಿತ್ರ—ಎಲೈ ಮಿತ್ರಾವರುಣರೇ । **ಉಷಸೋ ವ್ಯುಷ್ಟೌ**—ಉಷಸ್ಸಿನ ಆವಿರ್ಭವಕಾಲದಲ್ಲೂ । **ಸೂರ್ಯಸ್ಯ ಉದಿತಾ**—ಸೂರ್ಯೋದಯಕಾಲದಲ್ಲೂ । **ಹಿರಣ್ಯರೂಪಂ**—ಸುವರ್ಣಾತ್ಮಕವಾದುದೂ । **ಅಯಃ ಸ್ಥೂಣಂ**—ಉಕ್ಕಿನಸ್ತಂಭಗಳುಳ್ಳದ್ದೂ ಆದ **ಗರ್ತಂ**—ರಥವನ್ನು । **ಆ ರೋಹಥಃ**—ನೀವು ಹತ್ತುತ್ತೀರಿ । **ಅತಃ**—ಅನಂತರ । **ಅದಿತಿಂ**—ಅಖಂಡಳಾದ ಪೃಥ್ವಿಯನ್ನೂ । **ದಿತಿಂ ಚ**—ಖಂಡರೂಪವಾದ ತತ್ಪ್ರಜೆಗಳನ್ನೂ । **ಚಕ್ಷಾಥೇ**—ನೋಡುತ್ತೀರಿ.

॥ ಭಾವಾರ್ಥ ॥

ಎಲೈ ಮಿತ್ರಾವರುಣರೇ, ಉಷಸ್ಸಿನ ಆವಿರ್ಭವಕಾಲದಲ್ಲೂ, ಸೂರ್ಯನ ಉದಯಕಾಲದಲ್ಲೂ, ನೀವು ನಿಮ್ಮ ಸುವರ್ಣರೂಪವುಳ್ಳದ್ದೂ, ಉಕ್ಕಿನಸ್ತಂಭಗಳುಳ್ಳದ್ದೂ ಆದ ರಥವನ್ನು ಹತ್ತುತ್ತೀರಿ. ಅನಂತರ ಅಖಂಡಳಾದ ಪೃಥ್ವಿಯನ್ನೂ, ಖಂಡರೂಪರಾದ ಪ್ರಜೆಗಳನ್ನೂ ನೋಡುತ್ತೀರಿ.

## English Translation

At the break of dawn, at the rising of the sun, ascend, Mitra and Varuna, your golden-bodied, iron-pillared car, and thence behold theearth and its inhabitants

॥ ವಿಶೇಷವಿಷಯಗಳು ॥

**ಉಷಸೋ ವ್ಯುಷ್ಟೌ ಸೂರ್ಯಸ್ಯ ಉದಿತಾ**-ಉಷಸ್ಸಿನ ಆವಿರ್ಭಾವಕಾಲದಲ್ಲಿ ಮತ್ತು ಸೂರ್ಯನು ಉದಯಿಸಿದಾಗ ಎಂಬ ಎರಡು ವಾಕ್ಯಗಳಿಗೂ ಪ್ರಾತಃಕಾಲದಲ್ಲಿ ಎಂಬ ಒಂದೇ ಅರ್ಥವು ಸೂಚಿತವಾಗುವುದು. ಪ್ರಾತಃಕಾಲದಲ್ಲಿ ಯಜ್ಞಕರ್ಮವು ನಡೆಯುತ್ತಿರುವಾಗ ಹೋತೃವು ನಿಮ್ಮನ್ನು ಆಹ್ವಾನಮಾಡಿದೊಡನೆಯೇ ನೀವು ಯಜ್ಞಭೂಮಿಗೆ ಬರುವುದಕ್ಕಾಗಿ ನಿಮ್ಮ ಸುವರ್ಣಮಯವಾದ ಮತ್ತು ಉಕ್ಕಿನ ಸ್ಥಂಭಗಳುಳ್ಳ ರಥವನ್ನೇರುತ್ತೀರಿ ಎಂದು ಋಷಿಯು ಮಿತ್ರಾವರಣರ ಆಗಮನವನ್ನು ವರ್ಣಿಸಿದಾನೆ.

**ಅದಿತಿಂ ದಿತಿಂ ಚ ಚಕ್ಷಾಥೇ—ಅದಿತಿಮಖಂಡನೀಯಾಂ ಭೂಮಿಂ ದಿತಿಂ ಖಂಡಿತಾಂ ಪ್ರಜಾದಿಕಂ ಚ ಪಶ್ಯಥಃ ।** ಭಾಷ್ಯಕಾರರು ಅದಿತಿಶಬ್ದಕ್ಕೆ ಖಂಡರಹಿತವಾದ ಎಂದರೆ ಬೇರೆಬೇರೆಯಾಗಿ ವಿಭಾಗಿಸಲ್ಪಡದೆ ಅಖಂಡವಾಗಿ ದೊಡ್ಡದಾದ ಒಂದೇ ಆಕಾರವುಳ್ಳ ಭೂಮಿಯನ್ನು ಎಂದೂ, ದಿತಿಶಬ್ದಕ್ಕೆ-ಭಾಗಗಳಾಗಿರುವ ಎಂದರೆ ಬೇರೆ ಬೇರೆಯಾಗಿರುವ ಜನರನ್ನು ನೋಡುವಿರಿ ಎಂದೂ ಅರ್ಥವಿವರಣೆಮಾಡಿದಾರೆ. ಮಿತ್ರಾವರುಣರು ತಮ್ಮ ಸುವರ್ಣಮಯವಾದ ರಥದಲ್ಲಿ ಕುಳಿತು ಅಂತರಿಕ್ಷಮಾರ್ಗವಾಗಿ ಭೂಮಿಯಲ್ಲಿರುವ ಯಜ್ಞಭೂಮಿಗೆ ಬರುವಾಗ ಮೊದಲು ಭೂಮಿಯನ್ನೂ ಅನಂತರ ಅದರಲ್ಲಿರುವ ಜನಗಳನ್ನೂ ನೋಡುತ್ತಾರೆ ಎಂದರೆ ಮೊದಲು ಭೂಮಿಯೂ ಅನಂತರ ಅಲ್ಲಿರುವ ಜನರೂ ರಥದಲ್ಲಿ ಕುಳಿತು ಅಧೋಮುಖವಾಗಿ ನೋಡುತ್ತಿರುವ ಮಿತ್ರಾವರುಣರ ದೃಷ್ಟಿಗೆ ಬೀಳುವರು ಎಂಬಿಪ್ರಾಯವು ಸೂಚಿತವಾಗಿದೆ.



॥ ಸಂಹಿತಾಪಾಠಃ ॥

ಯದ್ಬಂಹಿಷ್ಠಂ ನಾತಿವಿಧೇ ಸುದಾನೂ ಅಚ್ಛಿದ್ರಂ ಶರ್ಮ ಭುವನಸ್ಯ ಗೋಪಾ ।
ತೇನ ನೋ ಮಿತ್ರಾವರುಣಾವವಿಷ್ಟಂ ಸಿಷಾಸಂತೋ ಜಿಗೀವಾಂಸಃ ಸ್ಯಾಮ ॥

॥ ಪದಪಾಠಃ ॥

ಯತ್ । ಬಂಹಿಷ್ಠಂ । ನ । ಅತಿऽವಿಧೇ । ಸುದಾನೂ ಇತಿ ಸುऽದಾನೂ । ಅಚ್ಛಿದ್ರಂ । ಶರ್ಮ । ಭುವನಸ್ಯ । ಗೋಪಾ ।

ತೇನ । ನಃ । ಮಿತ್ರಾವರುಣೌ । ಅವಿಷ್ಟಂ । ಸಿಸಾಸಂತಃ । ಜಿಗೀವಾಂಸಃ । ಸ್ಯಾಮ ॥ ೯ ॥

॥ ಸಾಯಣಭಾಷ್ಯಂ ॥

ದಾಕ್ಷಾಯಣಯಜ್ಞೇ ಯದ್ಬಂಹಿಷ್ಠಮಿತಿ ನವಮೀ ದ್ವಿತೀಯಸ್ಯಾಮನೂವಾಸ್ಯಾಯಾಂ ಮೈತ್ರಾವರುಣಸ್ಯ ಹವಿಷೋ ಯಾಜ್ಯಾ । ಸೂತ್ರಿತಂ ಚ । ಆ ನೋ ಮಿತ್ರಾವರುಣಾ ಯದ್ಬಂಹಿಷ್ಠಂ ನಾತಿವಿಧೇ ಸುದಾನೂ । ಆ. ೨-೧೪ । ಇತಿ ॥ ಮೈತ್ರಾವರುಣೇ ಪಶೌ ಹವಿಷ ಏಷೈವ ಯಾಜ್ಯಾ । ಸೂತ್ರಿತಂ ಚ । ಯದ್ಬಂಹಿಷ್ಠಂ ನಾತಿವಿಧೇ ಸುದಾನೂ ಹಿರಣ್ಯಗರ್ಭಃ ಸಮವರ್ತತಾಗ್ರೇ । ಆ. ೩-೮ । ಇತಿ ॥

ಹೇ ಸುದಾನೂ ಶೋಭನದಾನೌ ಹೇ ಭುವನಸ್ಯ ಗೋಪಾ ಯುವಾಂ ಬಂಹಿಷ್ಠಂ ಬಹುತನತಿ ಯದಚ್ಛಿದ್ರಮನವಚ್ಛಿನ್ನಂ ಶರ್ಮ ಸುಖಂ ಗೃಹಂ ವಾ ನಾತಿವಿಧೇಽತಿವೇದ್ಧುಮಶಕ್ಯಂ ಶರ್ಮೇಽಂ ಶರ್ಮವಿಶೇಷಣಂ ॥ ವ್ಯಧ ತಾಡನ ಇತ್ಯಸ್ಮಾದತ್ಯುಪಪದೇ ಕೃತ್ಯಾರ್ಥೇ ಕೇನ್ ಸಂಪ್ರಸಾರಣಂ ಚ ॥ ತಾದೃಶಂ ಶರ್ಮ ಧಾರಯಥಃ ತೇನ ಶರ್ಮಣಾ ನೋಽಸ್ಮಾನವಿಷ್ಟಂ । ರಕ್ಷತಂ । ಹೇ ಮಿತ್ರಾವರುಣೌ ಸಿಷಾಸಂತೋ ಧನಾನಿ ಸಂಭಕ್ತುಮಿಚ್ಛಂತೋ ವಯಂ ಜಿಗೀವಾಂಸಃ ಶತ್ರೂಣಾಂ ಧನಾನಿ ಜೇತುಮಿಚ್ಛಂತಃ ಸ್ಯಾಮ । ಭವೇಮ ॥

॥ ಪ್ರತಿಪದಾರ್ಥ ॥

**ಸುದಾನೂ**—ಶ್ರೇಷ್ಠವಾದ ದಾನಿಗಳಾದ ಎಲೈ ಮಿತ್ರಾವರುಣರೇ । **ಭುವನಸ್ಯ**—ವಿಶ್ವಕ್ಕೆ । **ಗೋಪಾ**—ರಕ್ಷಕರಾದ ನೀವು । **ಬಂಹಿಷ್ಠಂ**-ಅತಿ ಪ್ರಭೂತವಾದುದೂ । **ಅಚ್ಛಿದ್ರಂ**—ಭಂಗರಹಿತವಾದುದೂ । **ನಾತಿವಿಧೇ**—ಇತರರಿಂದ ಭೇದಮಾಡಲು ಸಾಧ್ಯವಿಲ್ಲದುದೂ ಆದ। **ಯತ್**-ಯಾವ ಸುಖವನ್ನೂ ರಕ್ಷಣೆಯನ್ನೂ ಹೊಂದಿದ್ದೀರೋ। **ತೇನ**—ಅದರಿಂದ । **ನಃ**—ನಮ್ಮನ್ನು । **ಅವಿಷ್ಟಂ**—ರಕ್ಷಿಸಿ । **ಮಿತ್ರಾವರುಣೌ**—ಎಲೈ ಮಿತ್ರಾವರುಣರೇ । **ಸಿಷಾಸಂತಃ**—ಧನವನ್ನು ಹೊಂದಲು ಇಚ್ಛೆಯುಳ್ಳ ನಾವು । **ಜಿಗೀವಾಂಸಃ**—ಶತ್ರುಗಳನ್ನು ಜಯಿಸಿ ಅವರ ಧನಗಳನ್ನು ಪಡೆಯುವ ಶಕ್ತಿಯುಳ್ಳವರಾಗಿ । **ಸ್ಯಾಮ**—ಆಗುವಂತೆ ಅನುಗ್ರಹಿಸಿ.

॥ ಭಾವಾರ್ಥ ॥

ಶ್ರೇಷ್ಠರಾದ ದಾನಿಗಳಾದ ಎಲೈ ಮಿತ್ರಾವರುಣರೇ, ವಿಶ್ವಕ್ಕೆ ರಕ್ಷಕರಾದ ನೀವು ಅತಿ ಪ್ರಭೂತವಾದುದೂ, ಭಂಗರಹಿತವಾದುದೂ, ಇತರರಿಂದ ಭೇದಮಾಡಲು ಸಾಧ್ಯವಿಲ್ಲದುದೂ ಆದ ಯಾವ ಸುಖವನ್ನೂ ರಕ್ಷಣೆಯನ್ನೂ ಹೊಂದಿದ್ದೀರೋ, ಅದರಿಂದ ನಮ್ಮನ್ನು ರಕ್ಷಿಸಿ. ಎಲೈ ಮಿತ್ರಾವರುಣರೇ, ಧನವನ್ನು ಹೊಂದಲು ಇಚ್ಛೆಯುಳ್ಳ ನಾವು ಶತ್ರುಗಳನ್ನು ಜಯಿಸಿ ಅವರ ಧನಗಳನ್ನು ಪಡೆಯುವ ಶಕ್ತಿಯುಳ್ಳವರಾಗಿ ಆಗುವಂತೆ ಅನುಗ್ರಹಿಸಿ.

English Translation

Munificent Mitra and Varuna, protectors of the universe, (it is yours to grant) exceeding and perfect felicity, such as it is impossible to disturb: bless us with that (felicity), and may we ever be (possessed) of the riches we desire, and be confident of victory (over our enemies.)

॥ ವಿಶೇಷವಿಷಯಗಳು ॥

**ದಾಕ್ಷಾಯಣಯಜ್ಞ**ದಲ್ಲಿ **ಯದ್ಬಂಹಿಷ್ಠಂ**—ಎಂಬ ಈ ಸೂಕ್ತದ ಒಂಭತ್ತನೆಯ ಋಕ್ಕನ್ನು ಎರಡನೆಯ ಅಮಾವಾಸ್ಯೆಯಲ್ಲಿ ಮಿತ್ರಾವರುಣರನ್ನುದ್ದೇಶಿಸಿ ಮಾಡುವ ಹವಿಸ್ಸಿನ ಹೋಮದಲ್ಲಿ ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನಶ್ರೌತಸೂತ್ರದ-**ಆ ನೋ ಮಿತ್ರಾವರುಣಾ ಯದ್ಬಂಹಿಷ್ಠಂ ನಾತಿವಿಧೇ ಸುದಾನೂ** ಎಂಬ ಸೂತ್ರದಿಂದ (ಆ. ೨-೧೪) ವಿವೃತವಾಗಿರುವುದು. ಮತ್ತು ಮೈತ್ರಾವರುಣ ಸಂಬಂಧವಾದ ಪಶುಯಾಗದಲ್ಲಿಯೂ ಸಹ ಹವಿಸ್ಸನ್ನು ಹೋಮಮಾಡುವಾಗ ಈ ಋಕ್ಕನ್ನು ಯಾಜ್ಯಾಮಂತ್ರವನ್ನಾಗಿ ಉಪಯೋಗಿಸಬೇಕೆಂದು ಆಶ್ವಲಾಯನ ಶ್ರೌತಸೂತ್ರದ—**ಯದ್ಬಂಹಿಷ್ಠಂ ನಾತಿವಿಧೇ ಸುದಾನೂ ಹಿರಣ್ಯಗರ್ಭಃ ಸಮವರ್ತತಾಗ್ರೇ** ಎಂಬ ಸೂತ್ರದಿಂದ (೩-೮) ವಿವೃತವಾಗಿರುವುದು.

ಸೂಕ್ತದ ಉಪಸಂಹಾರರೂಪವಾದ ಈ ಋಕ್ಕಿನಲ್ಲಿ ಋಷಿಯು ಶಾಶ್ವತವಾದ ಸುಖವನ್ನೂ, ಗೃಹ, ಧನ ಮೊದಲಾದುವುಗಳನ್ನು ಕೊಡಬೇಕೆಂದೂ ಶತ್ರುಗಳನ್ನು ನಾವು ಜಯಿಸುವಂತಾಗಬೇಕೆಂದೂ ಮಿತ್ರಾವರುಣರನ್ನು ಪ್ರಾರ್ಥಿಸಿದಾನೆ.



**ವೇದಾರ್ಥಸ್ಯ ಪ್ರಕಾಶೇನ ತಮೋ ಹಾರ್ದಂ ನಿವಾರಯನ್ ।**
**ಪುಮರ್ಥಾಂಶ್ಚತುರೋ ದೇಯಾದ್ವಿದ್ಯಾತೀರ್ಥಮಹೇಶ್ವರಃ ॥**
**ಇತಿ ಶ್ರೀ ಮದ್ರಾಜಾಧಿರಾಜಪರಮೇಶ್ವರ ವೈದಿಕಮಾರ್ಗಪ್ರವರ್ತಕ ಶ್ರೀ ವೀರಬುಕ್ಕಭೂಪಾಲ-**
**ಸಾಮ್ರಾಜ್ಯಧುರಂಧರೇಣ ಸಾಯಣಾಮಾತ್ಯೇನ ವಿರಚಿತೇ ಮಾಧವೀಯೇ**
**ವೇದಾರ್ಥಪ್ರಕಾಶೇ ಋಕ್ಸಂಹಿತಾಭಾಷ್ಯೇ ಚತುರ್ಥಾಷ್ಟಕೇ**
**ತೃತೀಯೋಽಧ್ಯಾಯಃ ಸಮಾಪ್ತಃ**



॥ ಓಂ ತತ್ಸತ್ ॥
ಇಲ್ಲಿಗೆ ಶ್ರೀಸಾಯಣಭಾಷ್ಯಸಹಿತವೂ ಕರ್ನಾಟಕಭಾಷಾನುವಾದಯುತವೂ ಆದ
ಋಗ್ವೇದಸಂಹಿತೆಯ ಚತುರ್ಥಾಷ್ಟಕದಲ್ಲಿ
ಮೂರನೆಯ ಅಧ್ಯಾಯವು ಸಮಾಪ್ತವಾದುದು.

ಯದಕ್ಷರಪದಭ್ರಷ್ಟಂ ಮಾತ್ರಾಹೀನಂ ತು ಯದ್ಭವೇತ್ ।
ತತ್ಸರ್ವಂ ಕ್ಷಮ್ಯತಾಂ ದೇವ ವಾಗೀಶ್ವರ ನಮೋಽಸ್ತು ತೇ ॥
॥ ಶುಭಂ ಭೂಯಾತ್ ॥
॥ ಮಂಗಳಂ ॥

